

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1812 |
| ಉತ್ತರಿಸುವ ಸಚಿವರು | : | ಮಾನ್ಯ ಕೈಮಗ್ಗ ಮತ್ತು ಜವಳಿ, ಸಕ್ಕರೆ ಹಾಗೂ ಕಬ್ಬು ಅಭಿವೃದ್ಧಿ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 15-03-2022 |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ನೂತನ ಜವಳಿ ನೀತಿಯಲ್ಲಿ ಆರಂಭಗೊಂಡಿರುವ ಹೊಲಿಗೆ ತರಬೇತಿ ಕೇಂದ್ರಗಳ ಸಂಖ್ಯೆ ಎಷ್ಟು; ಈ ತರಬೇತಿ ಕೇಂದ್ರಗಳಿಗೆ ಸರ್ಕಾರ ನೀಡುತ್ತಿರುವ ಅನುದಾನವೆಷ್ಟು; ಕಳೆದ 03 ವರ್ಷಗಳಲ್ಲಿ ಎಷ್ಟು ನಿರುದ್ಯೋಗಿಗಳಿಗೆ ಈ ಕೇಂದ್ರಗಳಲ್ಲಿ ತರಬೇತಿ ನೀಡಲಾಗಿದೆ: | ಕೈಮಗ್ಗ ಮತ್ತು ಜವಳಿ ಇಲಾಖೆಯ ಜವಳಿ ನೀತಿ ಯೋಜನೆಯಡಿಯಲ್ಲಿ ಒಟ್ಟು 284 ಸೀವಿಂಗ್ ಮೆಷಿನ್ ಅಪರೇಟರ್ ಹೊಲಿಗೆ ತರಬೇತಿ ಕೇಂದ್ರಗಳು ಆರಂಭಗೊಂಡಿದ್ದು, ವಿವರ ಈ ಇಂತಿದೆ:-<br>• ಸರ್ಕಾರಿ ತರಬೇತಿ ಕೇಂದ್ರಗಳು – 114<br>• ಖಾಸಗಿ ತರಬೇತಿ ಕೇಂದ್ರಗಳು – 170<br><br>ಸರ್ಕಾರಿ ಸೀವಿಂಗ್ ಮೆಷಿನ್ ಅಪರೇಟರ್ ಹೊಲಿಗೆ ತರಬೇತಿ ಕೇಂದ್ರಗಳಿಗೆ ಪ್ರತಿ ಅಭ್ಯರ್ಥಿಗೆ ತರಬೇತಿ ವೆಚ್ಚಕ್ಕಾಗಿ ರೂ.9,500/-ಗಳು ಹಾಗೂ ಖಾಸಗಿ ಸೀವಿಂಗ್ ಮೆಷಿನ್ ಅಪರೇಟರ್ ಹೊಲಿಗೆ ತರಬೇತಿ ಕೇಂದ್ರಗಳಿಗೆ ಪ್ರತಿ ಅಭ್ಯರ್ಥಿಗೆ ತರಬೇತಿ ವೆಚ್ಚಕ್ಕಾಗಿ ರೂ.11,000/-ಗಳ ಅನುದಾನ ನೀಡಲಾಗುತ್ತಿದೆ.<br><br>ಕಳೆದ 03 ವರ್ಷಗಳಲ್ಲಿ 61987 ನಿರುದ್ಯೋಗಿ ಯುವಕ / ಯುವತಿಯರಿಗೆ ಒಟ್ಟು 284 ಸೀವಿಂಗ್ ಮೆಷಿನ್ ಅಪರೇಟರ್ (SMO) ತರಬೇತಿ ಕೇಂದ್ರಗಳಲ್ಲಿ ಹೊಲಿಗೆ ತರಬೇತಿಯನ್ನು ನೀಡಲಾಗಿದ್ದು, ವಿವರ ಈ ಕೆಳಕಂಡಂತಿದೆ:- |

| ಕ್ರ ಸಂ | ವರ್ಷ | ತರಬೇತಿ ಪಡೆದವರ ಸಂಖ್ಯೆ |
|---|---|---|
| 1 | 2018-19 | 26627 |
| 2 | 2019-20 | 29080 |
| 3 | 2020-21 | 6280 |
| ಒಟ್ಟು | | 61987 |

| | | |
|---|---|---|
| ಆ) | ರಾಜ್ಯವು ಗಾರ್ಮೆಂಟ್ಸ್ ಉದ್ಯಮದ ಕೇಂದ್ರವಾಗಿದ್ದು, ಈ ಗಾರ್ಮೆಂಟ್ಸ್ ಕಂಪನಿಗಳಿಗೆ ಉನ್ನತ ದರ್ಜೆಯ ಟೈಲರ್‌ಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಇ) | ಈ ಕೊರತೆಯನ್ನು ನಿವಾರಿಸುವ ಮೂಲಕ ನಿರುದ್ಯೋಗಿಗಳಿಗೆ, ಉದ್ಯೋಗ ಕಂಪನಿಗಳಿಗೆ ಉದ್ಯೋಗ ದೊರೆಯುವಂತಹ ಹೊಲಿಗೆ ತರಬೇತಿ ಕೇಂದ್ರಗಳನ್ನು ಸಂಪೂರ್ಣವಾಗಿ ಸರ್ಕಾರವೇ ವಹಿಸಿಕೊಂಡು ಆಸಕ್ತ ನಿರುದ್ಯೋಗಿಗಳಿಗೆ ತರಬೇತಿ ನೀಡುವ ಕುರಿತು ಸರ್ಕಾರದ ನಿಲುವೇನು? | ಜವಳಿ ನೀತಿ ಯೋಜನೆಯಡಿಯಲ್ಲಿ ಪ್ರತಿ ಸೀವಿಂಗ್ ಮೆಷಿನ್ ಅಪರೇಟರ್ ತರಬೇತಿ ಕೇಂದ್ರ ಪ್ರಾರಂಭಿಸಲು ಪ್ರತಿ ತರಬೇತಿ ಕೇಂದ್ರಕ್ಕೆ ರೂ.27.00 ಲಕ್ಷ ಅನುದಾನ ನೀಡಿ ಒಟ್ಟು 114 ಸರ್ಕಾರಿ ಎಸ್‌ಎಂಒ ತರಬೇತಿ ಕೇಂದ್ರಗಳನ್ನು ಸ್ಥಾಪಿಸಲಾಗಿರುತ್ತದೆ ಹಾಗೂ ಖಾಸಗಿ ವಲಯದಲ್ಲಿ 170 ತರಬೇತಿ ಕೇಂದ್ರಗಳನ್ನು ಸ್ಥಾಪಿಸಿ ಒಟ್ಟು 284 ತರಬೇತಿ ಕೇಂದ್ರಗಳ ಮೂಲಕ ತರಬೇತಿ ನೀಡಿ ಸಿದ್ಧ ಉಡುಪು ಘಟಕಗಳಿಗೆ ಅವಶ್ಯವಿರುವ ಟೈಲರ್‌ಗಳನ್ನು ಸೃಜಿಸಿ ಪೂರೈಸಲಾಗುತ್ತಿದೆ. |

ಸಂ: CI 100 JAKE 2022

(ಶಂಕರ ಬಿ ಪಾಟೀಲ ಮುನೇನಕೊಪ್ಪ)
ಕೈಮಗ್ಗ ಮತ್ತು ಜವಳಿ, ಸಕ್ಕರೆ ಹಾಗೂ ಕಬ್ಬು ಅಭಿವೃದ್ಧಿ ಸಚಿವರು